ತುಮಕೂರು ಸುನಂದಾ

# ಹೆಬ್ಬೂರು

'ಸುಜನಜನಪದ'ವೆಂದು ಖ್ಯಾತಿವೆತ್ತ ತುಮಕೂರು ಜಿಲ್ಲೆಗೆ ಸೇರಿದ ಮತ್ತು ನಗರದಿಂದ ೨೪ಕಿ.ಮೀ. ದೂರದಲ್ಲಿರುವ ಹೆಬ್ಬೂರು ಒಂದು ಹೋಬಳಿ. ಇದೊಂದು ಐತಿಹಾಸಿಕ ಮಹತ್ವದ. ವಾಸ್ತುಶಿಲ್ಪದ ವೈಶಿಷ್ಟ್ಯತೆ ಹೊಂದಿದೆ. ಇದೊಂದು ಪ್ರಾಚೀನ ದೇವಾಲಯಗಳ ಆಗರವೆಂದೇ ಹೇಳಬಹುದು.

ನೂರೊಂದು ದೇವಾಲಯ, ನೂರೊಂದು ಕೆರೆ–ಬಾವಿಗಳ ಬೀಡು ಎಂದು ಅಲ್ಲಿನ ಜನ ವರ್ಣಿಸುವುದುಂಟು. ಇದೊಂದು ಚಾರಿತ್ರಿಕ ನೆಲೆ. ಗಂಗರ ಚಾರಿತ್ರಿಕ ದಾಖಲೆಯಲ್ಲಿನ ಪ್ರಕಾರ, ನವಕಾಮ ಎಂಬ ವೀರನೊಬ್ಬನು ಹೆಬ್ಬೂರನ್ನು ದತ್ತಿಯಾಗಿ ಪಡೆದನೆಂದು ಉಲ್ಲೇಖಿತವಾಗಿದೆ ಹಾಗೂ ಇದರಲ್ಲಿ ದಿದಿಗ–ಮಾಧವ ಎಂಬ ಗಂಗ ಸಾಮ್ರಾಜ್ಯ ಸ್ಥಾಪಕರು ಹೆಸರು ಕಾಣಬರುವುದರಿಂದ, ಸುಮಾರು ಕ್ರಿ. ಶ. ೪ನೇ ಶತಮಾನದಲ್ಲೇ ಹೆಬ್ಬೂರು ತನ್ನ ಚಾರಿತ್ರಿಕ ಅಸ್ತಿತ್ವವನ್ನು ಪಡೆದಿರಬೇಕು. ಹೊಯ್ಸಳರು ಗಂಗರ ಸಾಮಂತರು ಆಗಿದ್ದರು. ಗಂಗರ ಕಾಲಾನಂತರ ಹೊಯ್ಸಳರ ಆಧಿಪತ್ಯಕ್ಕೆ ಸೇರಿಸಿಕೊಂಡು ತಮ್ಮ ಸಂಸ್ಕೃತಿ ಕಲೆ ಪ್ರಭಾವ ಬೀರಿದ್ದಾರೆ. ಅಲ್ಲಿರುವ ಕೆಲವು ದೇವಾಲಯಗಳ ಶೈಲಿ ಹೊಯ್ಸಳ ಕಲೆಯ ಪ್ರತಿಬಿಂಬವಾಗಿದೆ. ಹೊಯ್ಸಳ ಸೋಮೇಶ್ವರನು ತನ್ನ ಮಕ್ಕಳಿಬ್ಬರು ಎಂದರೆ ಮೂರನೇ ನರಸಿಂಹ ಬಲ್ಲಾಳ ಮತ್ತು ರಾಮನಾಥರಿಗೆ ರಾಜ್ಯವನ್ನು ಹಂಚುವಾಗ ತುಮಕೂರು ಪ್ರಾಂತ್ಯಕ್ಕೆ ಸೇರಿಕೊಂಡಂತೆ ಉರ್ಡಿಗೆರೆಯಿಂದ ಈಗಿನ ಹೆಬ್ಬೂರಿನವರೆಗೂ ನರಸಿಂಹನು ಪಡೆದುಕೊಂಡನು. ಆ ಕಾಲಕ್ಕೆ ಕೆಲವೇ ದೇವಾಲಯಗಳು ಅಸ್ತಿತ್ವಕ್ಕೆ ಬಂದಿರಬಹುದು.

ಹೊಯ್ಸಳರ ಅವನತಿಯನಂತರ ವಿಜಯನಗರದ ಆಧಿಪತ್ಯಕ್ಕೆ ಒಳಪಟ್ಟಿತು. ಕಟಿಕಾಮಣ್ಣ ಎಂಬುವನು ಈ ಪ್ರದೇಶದ ಪ್ರತಿನಿಧಿಯಾಗಿದ್ದನು. ಇದರ ಸಮೀಪದಲ್ಲಿರುವ ಕಲ್ಲೇಶಪುರ–ರಾಮೇನಹಳ್ಳಿ ಪಾಳ್ಯದ ಪಟೇಲಿಕೆ ತಿಮ್ಮೇಗೌಡ ಮತ್ತು ಹಾಲೇಗೌಡ ಎಂಬುವರು ವಹಿಸಿಕೊಂಡಿದ್ದರು. ಕೃಷ್ಣದೇವರಾಯನ ಕಾಲಕ್ಕೆ ತುಮಕೂರು ಜಿಲ್ಲಾ ಕೆಲವು ಪ್ರದೇಶಗಳನ್ನು ಜಾಗೀರು ಕೊಡುವಾಗ ಹಾಲೇಗೌಡನಿಗೆ ಬಿರುದು ಸಹಿತ ಹೆಬ್ಬೂರನ್ನು ನೀಡಲಾಯಿತು. ಇದರೊಂದಿಗೆ ಹಾಗಲವಾಡಿ ನಾಯಕತ್ವವನ್ನು ಪಡೆದಿದ್ದನು.

ಈ ಸಂಸ್ಥಾನಕ್ಕೆ ನಿಖರವಾದ ಹೆಸರು ಸಹಾ ಈ ಪಟೇಲರ ಪ್ರಭಾವದಿಂದಲೇ ಬಂದಿತು. ಸುತ್ತಮುತ್ತ ದಟ್ಟವಾದ ಕಾಡು, ವನ್ಯಮೃಗಗಳ ಬೀಡು ಆಗಿತ್ತು. ಹೆಬ್ಬುಲಿಯೊಂದು ಗ್ರಾಮದೊಳಗೆ ನುಗ್ಗಿದಾಗ ಬಲಿಷ್ಠವಾದ ಗೂಳಿಯೊಂದು ಆ ಹುಲಿಯನ್ನು ಅಟ್ಟಿಸಿಕೊಂಡು ಓಡಿದ್ದಲ್ಲದೆ ಅದು ಸಾಯುವವರೆಗೂ ಹಿಂಬಾಲಿಸಿತು. ಸತ್ತ ಹುಲಿಯನ್ನು ಭಸ್ಮಮಾಡಿ ಅದರ ಆ ಬೂದಿಯ ಗುರುತನ್ನು ಎಳೆದು ಎಲ್ಲಿಯವರೆಗೆ ಕಾಣಿಸಿಕೊಂಡಿತೋ ಅವರೆಗೂ ಈ ಪಟೇಲರು ಒಂದು ಕೋಟೆ ನಿರ್ಮಿಸಿದರು ಮತ್ತು ಹೆಬ್ಬುಲಿಯ ಊರು ಕ್ರಮೇಣ ಹೆಬ್ಬಲೂರು, ಹೆಬ್ಬೂರು ಎಂಬ ಹೆಸರನ್ನು ಪಡೆಯಿತೆಂಬ ಐತಿಹ್ಯವಿದೆ. ಈ ಗೌಡದ್ವಯರು ಅನೇಕ ಜನೋಪಕಾರ್ಯಗಳನ್ನು

ಮಾಡಿದಾಗ ಕೆರೆ–ಕಟ್ಟೆ–ಬಾವಿ–ದೇವಾಲಯಗಳನ್ನು ನಿರ್ಮಿಸಿದರು. ದೊರೆಗಳ ಅಪ್ಪಣೆಯಿಲ್ಲದೆ ಸ್ವೇಚ್ಛೆಯಿಂದ ಮಾಡಿದರೆಂಬ ಆಪಾದನೆ ಸಹ ಹೊರೆಸಿ ಕಣ್ಣು ಕೀಳಿಸಿದರೆಂಬ ಪ್ರತೀತಿಯುಂಟು.

ನಂತರ ಮಹಮ್ಮದೀಯರು, ಚಿಕ್ಕನಾಯಕನಹಳ್ಳಿ ಪಾಳೆಗಾರರು. ಮಾಗಡಿ ಕೆಂಪೇಗೌಡ, ಚಿಕ್ಕದೇವರಾಜ ಒಡೆಯರು ತಮ್ಮ ಪಾರುಪತ್ಯ ನಡೆಸಿದರು. ಇದಲ್ಲದೆ ಮಹಾಜನ, ಮೊಗಲರ ಹಿಡಿತಕ್ಕೂ ಸಿಕ್ಕಿತು. ಮತ್ತೆ ಮೈಸೂರು ದೊರೆಗಳು ತಮ್ಮ ಆಳ್ವಿಕೆಗೊಳಪಡಿಸಿಕೊಂಡರು.

ನೂರೊಂದು ದೇವಾಲಯಗಳ ಆಗರವೆನಿಸಿದರೂ ಅನೇಕ ದೇವಾಲಯಗಳು, ಶಿಲಾಮೂರ್ತಿಗಳು, ಕಂಭಗಳು ಶಿಥಿಲವಾಗಿಬಿಟ್ಟಿವೆ, ಕೆಲವು ಭೂಗತವಾಗಿವೆ, ಜಲಸಮಾಧಿಯಾಗಿವೆ. ಇದೀಗ ಜನರ ಅಸಡ್ಡೆಯಿಂದ ಸಾಕಷ್ಟು ದೇವಾಲಯಗಳು ಅವ್ಯವಸ್ಥ ಸ್ಥಿತಿಯಲ್ಲಿವೆ. ಶಿವ–ವಿಷ್ಣು, ಕೊಲ್ಲಾಪುರದಮ್ಮ, ವೀರಭದ್ರ, ಆಂಜನೇಯ, ಬಿಸಿಲು ಮಾರಮ್ಮ, ನೆರಳು ಮಾರಮ್ಮ, ಗಣಪತಿ, ವರದರಾಜಸ್ವಾಮಿ, ಚಿಕ್ಕವೀರಸ್ವಾಮಿ, ಬಸವ, ತೆರುಪ್ಪಾಳ, ಗೋಪಾಲಸ್ವಾಮಿ,ಬ್ಯಾಟರಾಯನ ದೇವಾಲಯಗಳು ಹೊಯ್ಸಳ, ವಿಜಯನಗರ ಕಲಾಶೈಲಿಯಲ್ಲಿ ಸರಳವಾಗಿ ಮೂಡಿಬಂದಿವೆ. ಶಾಸನಗಳು ಮಾತ್ರ ಸದ್ಯಕ್ಕೆ ಕಂಡುಬಂದಿಲ್ಲ. ಅತ್ಯಂತ ಸುಂದರವಾದ ವಾಸ್ತುಶಿಲ್ಪಶೈಲಿ ಕಾಣಬರುವುದೆಂದರೆ ವರದರಾಜಸ್ವಾಮಿ ದೇವಾಲಯದಲ್ಲಿ ಲೋವೆ, ಕಂಬಗಳು, ಮೆಟ್ಟಿಲುಗಳ ಅಕ್ಕಸಕ್ಕ ಆನೆಗಳು ಇತ್ಯಾದಿ ಸಾಕಷ್ಟು ವಿಜಯನಗರದ ಕಲಾಶೈಲಿಯನ್ನೇ ಹೋಲುತ್ತವೆ. ಆದರೂ ಹೆಬ್ಬೂರಿನ ಇತಿಹಾಸ ಸಂಶೋಧನೆ ಮಾಡುವುದು ಅಗತ್ಯವಾಗಿದೆ.